ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಗ್ರಾಮ ಪಂಚಾಯಿತಿ ಮತ್ತು ಅವುಗಳು ಜಾರಿಗೊಳಿಸುವ ಯೋಜನೆಗಳ ಕುರಿತು

ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

846 (905) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹಾಸನ ಜಿಲ್ಲೆಯಲ್ಲಿರುವ ಗ್ರಾಮ ಪಂಚಾಯಿತಿಗಳಿಗೆ ಕಳೆದ 3 ವರ್ಷಗಳಲ್ಲಿ ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು; ಈ ಅನುದಾನವನ್ನು ಯಾವ ಯಾವ ಉದ್ದೇಶಗಳಿಗಾಗಿ ಖರ್ಚು ಮಾಡಲಾಗಿದೆ ; (ಗ್ರಾಮ ಪಂಚಾಯಿತಿವಾರು ವಿವರ ನೀಡುವುದು)

(ಆ) ಸರ್ಕಾರದ ಯಾವ ಯಾವ ಕಾರ್ಯಕ್ರಮ/ಯೋಜನೆಗಳು ಗ್ರಾಮ ಪಂಚಾಯಿತಿಗಳ ಮೂಲಕ ಜಾರಿಗೆ ಬರುತ್ತಿವೆ ; ಈ ಕಾರ್ಯಕ್ರಮ /ಯೋಜನೆಗಳಿಗಾಗಿ ಕಳೆದ 3 ವರ್ಷಗಳಲ್ಲಿ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವೆಷ್ಟು ; ಇದರಲ್ಲಿ ಖರ್ಚಾದ ಅನುದಾನವೆಷ್ಟು ; (ಫಲಾನುಭವಿಗಳ ಗ್ರಾಮ ಪಂಚಾಯಿತಿವಾರು ವಿವರ ನೀಡುವುದು)

(ಇ) ಕಳೆದ 3 ವರ್ಷಗಳಲ್ಲಿ ಈ ಗ್ರಾಮ ಪಂಚಾಯಿತಿಗಳು ಕರಗಳ ರೂಪದಲ್ಲಿ ಸಾರ್ವಜನಿಕರಿಂದ ಸ್ವೀಕರಿಸಿರುವ ಆದಾಯವೆಷ್ಟು ; ಈ ಆದಾಯವನ್ನು ಯಾವ ಯಾವ ಉದ್ದೇಶಗಳಿಗಾಗಿ ಖರ್ಚು ಮಾಡಲಾಗಿದೆ ; (ಗ್ರಾಮ ಪಂಚಾಯಿತಿವಾರು ವಿವರ ನೀಡುವುದು)

(ಈ) ಹಾಸನ ಜಿಲ್ಲೆಯ ಯಾವ ಗ್ರಾಮ ಪಂಚಾಯಿತಿಗಳು ಸ್ವಂತ ಕಟ್ಟಡಗಳನ್ನು ಹೊಂದಿವೆ ; ಯಾವ ಗ್ರಾಮ ಪಂಚಾಯಿತಿಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ ; ಇದಕ್ಕೆ ಪಾವತಿಸುತ್ತಿರುವ ಬಾಡಿಗೆ ಮೊತ್ತವೆಷ್ಟು ? (ಗ್ರಾಮ ಪಂಚಾಯಿತಿವಾರು ವಿವರ ನೀಡುವುದು)